

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 16-03-2021 ಪ್ರಶ್ನೆ ಸಂಖ್ಯೆ : 181 (1413)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಗೋವಿಂದ ರಾಜು (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 16-03-2021

ಉತ್ತರಿಸುವ ಸಚಿವರು: ಗಣಿ ಮತ್ತು ಭೂ ವಿಜ್ಞಾನ ಸಚಿವರು

ವಿಷಯ : ಚಪ್ಪಡಿ ಕಲ್ಲುಗಳನ್ನು ಹೊಡೆದು ಜೀವನ ನಡೆಸುತ್ತಿರುವ ಬಗ್ಗೆ

(ಅ) ಕೋಲಾರ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ನೂರಾರು ವರ್ಷಗಳಿಂದ ಕಲ್ಲುಕುಟುಕರು (ಭೋವಿ ಜನಾಂಗ) ಈ ಪ್ರದೇಶದಲ್ಲಿರುವ ಬಂಡೆ ಕಲ್ಲುಗಳಿಂದ ಸೈಜು ಹಾಗೂ ಚಪ್ಪಡಿ ಕಲ್ಲುಗಳನ್ನು ಹೊಡೆದು ಜೀವನ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಹಾಗಿದ್ದಲ್ಲಿ, ಇತ್ತೀಚಿನ ದಿನಗಳಲ್ಲಿ ಕಲ್ಲು ಗಣಿಗಾರಿಕೆಯಲ್ಲಿ ನಡೆಯುತ್ತಿರುವ ಅಹಿತಕರ ಘಟನೆಗಳಿಂದ ಇಲಾಖೆಯವರು ಕಲ್ಲುಕುಟುಕರ ಕೆಲಸಕ್ಕೆ ತೊಂದರೆಯುಂಟು ಮಾಡುತ್ತಿರುವುದಲ್ಲದೆ ಅವರ ಕೆಲಸಕ್ಕೆ ಬಳಸುವ ಸಾಧನಗಳನ್ನು ವಶಪಡಿಸಿಕೊಳ್ಳುವುದು ಅವರ ಮೇಲೆ ಮೊಕದ್ದಮೆಗಳನ್ನು ದಾಖಲಿಸುವುದು ಹಾಗೂ ಕಲ್ಲು ತುಂಬಿದ ಲಾರಿ/ಟ್ರ್ಯಾಕ್ಟರ್‌ಗಳಿಗೆ ಸುಮಾರು ರೂ. 50.000ಗಳ ವರೆಗೆ ದಂಡ ವಿಧಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಸುಮಾರು 2 ಲಕ್ಷಗಳವರೆಗೆ ಇಂತಹ ಕುಟುಂಬಗಳು ಇದ್ದು ಅವರು ಜೀವನ ನಡೆಸುವುದು ತುಂಬಾ ಕಷ್ಟಕರವಾಗಿರುವುದರಿಂದ ಇವರ ಜೀವನೋಪಾಯಕ್ಕೆ ಸರ್ಕಾರ ಯಾವುದಾದರೂ ಯೋಜನೆಗಳನ್ನು ರೂಪಿಸಿದೆಯೇ ;

(ಈ) ಇವರ ಜೀವನೋಪಾಯಕ್ಕೆ ರೂಪಿಸಿರುವ ಯೋಜನೆಗಳು ಯಾವುವು ? (ಸಂಪೂರ್ಣ ಮಾಹಿತಿ ನೀಡುವುದು)